ಒಂದಾಣೆ ಮಾಲೆ.

164

ಶ್ರೀ ಪುರಂದರದಾಸರ

# ಭಜನಾ ಗೀತಗಳು

(ಭಾಗ ೧)



ಸಂಗ್ರಾಹಕರು:

ಶ್ರೀ। ಎಚ್. ಸುಂದರರಾಮ ರಾವ್,

ಮಂಗಳೂರು.

ಬೆಲೆ: ಆಣೆ ೧:

ಒಂದಾಣೆ ಮಾಲೆ--ಮಂಗಳೂರು.



# ಕ್ಷಯರೋಗದ ಚಿಕಿತ್ಸೆಯಲ್ಲಿ ಸಮಿತಿಗಳ ಪಾತ್ರ

ಸಮಾಜಸೇವೆಯಲ್ಲಿ ಆಸಕ್ತಿಯಿರುವ ವರ್ಚಸ್ಸುಳ್ಳ ಮಹನೀಯರು ಸೇರಿರುವ ಚಿಕ್ಕ ಸಮಿತಿಗಳು ಕ್ಷಯರೋಗಕ್ಕೆ ಗೃಹಚಿಕಿತ್ಸೆ ನಡೆಸುವ ಕಾರ್ಯದಲ್ಲಿ ಕ್ಷಯರೋಗ ಚಿಕಿತ್ಸಾಲಯಗಳಿಗೆ ನೆರವಾಗುವಲ್ಲಿ ಹೆಚ್ಚಿನ ಅಂಶದಾನ ಸಲಿಸಬಲ್ಲುವು. ಇಂಥ ಸಮಿತಿಗಳು ಜೋಪಾನ ಸಮಿತಿಗಳೆಂದು ಕರೆಯಲ್ಪಡುವುವು. ಇವುಗಳು, ತಮ್ಮ ಪ್ರದೇಶದ ಕ್ಷಯರೋಗ ಚಿಕಿತ್ಸಾಲಯಗಳೊಡನೆ ನಿಕಟಸಂಬಂಧವನ್ನಿರಿಸಿಕೊಂಡು ಕೆಲಸಮಾಡಬಹುದು. ಈ ಸಮಿತಿಗಳವರು ವಾಸ್ತವಿಕವಾಗಿ, ರೋಗಿ ಹಾಗೂ ಅವನ ಕುಟುಂಬದವರಿಗೆ ಸಂತೋಷ ಮತ್ತು ಆಸೆ ಭರವಸೆಗಳನ್ನು ತರುವ ಹಾಗು ರೋಗಿ ಮತ್ತು ಡಾಕ್ಟರುಗಳ ನಡುವೆ ಸಂಪರ್ಕವಿರಿಸುವ ರಾಯಭಾರಿಗಳಾಗಿರುವರು. ಅವರು ಚಿಕಿತ್ಸಾಲಯ ಮತ್ತು ಸಿಬಂಧಿಯೊಡನೆ ಸಮೀಪ ಸಂಬಂಧವಿಟ್ಟುಕೊಳ್ಳುವರು. ಅವರು ರೋಗಿಗಳ ಮತ್ತು ಅವರ ಕುಟುಂಬದವರ ಮೇಲೆ ತಮ್ಮ ಸದ್ವರ್ಚಸ್ಸನ್ನುಪಯೋಗಿಸಿ, ಕ್ಷಯರೋಗ ಚಿಕಿತ್ಸೆ ಹಾಗು ನಿರೋಧ ಕಾರ್ಯದಲ್ಲಿ ಆ ರೋಗಿಗಳೂ ಅವರ ಕುಟುಂಬಗಳೂ ಸಹಕರಿಸುವಂತೆ ನೆರವಾಗುವರು.

ಈ ಕಾರ್ಯಕ್ಕೆ ಹಣವು ಅವಶ್ಯವಿದೆ. ಈ ಜೋಪಾನ ಸಮಿತಿಗಳು ಸುಸೂತ್ರವಾಗಿ ಕೆಲಸ ಸಾಗಿಸಲು ತಕ್ಕ ಸಾಧನಗಳು ಬೇಕು.. ಅವುಗಳು, ಕ್ಷಯರೋಗ ಸಮಿತಿಗಳಿಂದ ಸಹಾಯವನ್ನು ನಿರೀಕ್ಷಿಸುತ್ತವೆ. ಕ್ಷಯರೋಗ ಮುದ್ರೆ ಮಾರಾಟ ಚಳವಳವು ಕ್ಷಯರೋಗ ಸಂಘಗಳಿಗೆ ನಿಧಿಯನ್ನೆತ್ತಲು ಸಹಾಯಕವಾಗಿದೆ. ಈ ಮುದ್ರೆಗಳನ್ನು ಅಧಿಕಾಧಿಕ ಸಂಖ್ಯೆಯಲ್ಲಿ ಕೊಂಡುಕೊಂಡು ನಿಮ್ಮ ಕ್ಷಯರೋಗ ಸಂಸ್ಥೆಗೆ ಸಹಾಯ ನೀಡಿರಿ.




## ಎಂಟನೇ ಕ್ಷಯರೋಗ ಮುದ್ರೆ ಮಾರಾಟ ಚಳವಳ.

ಮುದ್ರೆಗಳು ಈ ಕೆಳಗಿನವರಲ್ಲಿ ದೊರೆವುವು:

ಗೌರವ ಕಾರ್ಯದರ್ಶಿ, ಮುದ್ರೆ ಮಾರಾಟ ಸಮಿತಿ, ಗೋಪಾಲಕೃಷ್ಣ ದೇವಸ್ಥಾನ ರಸ್ತೆ, ಮಂಗಳೂರು.

ಜಿಲ್ಲಾ ಮೆಡಿಕಲ್ ಆಫೀಸರರು, ಮಡಿಕೇರಿ, ಕೊಡಗು.

ಗೌರವ ಕಾರ್ಯದರ್ಶಿ, ಕ್ಷಯರೋಗ ಸಂಸ್ಥೆ-ಮೈಸೂರು, ಲೇಡಿ ವಿಲ್ಲಿಂಗ್ಡನ್ ಕ್ಷಯರೋಗ ಚಿಕಿತ್ಸಾಲಯ ಮತ್ತು ಔಷಧಾಲಯ, ಬೆಂಗಳೂರು ನಗರ ಮತ್ತು ರಾಜ್ಯದ ಇತರ ಏಜನ್ಸಿಗಳಿಂದ.

ಈ ಸ್ಥಳ—'ಒಂದಾಣೆ ಮಾಲೆ,' ಮಂಗಳೂರು—ಇವರ ಸೇವಾದಾನ.

## ಶ್ರೀ ಪುರಂದರದಾಸರ

# ಭಜನಾ ಗೀತಗಳು

---

॥ ರಾಗಃ ಸಾವೇರಿ. ತಾಳ: ಝಂಪೆ ॥

ವಂದಿಸುವೆನಾದಿಯಲಿ ಗಣನಾಥನ ।
ಸಂದೇಹವಿಲ್ಲ ಶ್ರೀ ಹರಿಯಾಜ್ಞೆಯಿದಕೆ ॥ ಪಲ್ಲ ॥

ಹಿಂದೆ ರಾವಣ ತಾನು ವಂದಿಸದೆ ಗಜಮುಖನ ।
ನಿಂದು ತಪವನೆ ಗೈದು ವರ ಪಡೆಯಲು ॥
ನಂದಿವಾಹನ ಸುತನು ಬಂದು ವಿಘ್ನವ ಮಾಡೆ ।
ಅಂದು ವರವನು ಧರೆಗೆ ಇಳುಹಿದನಾಗಿ ॥ ೧ ॥

ಅಂದಿನಾ ಬಗೆ ಅರಿತು ಬಂದು ಹರಿ ಧರ್ಮಜಗೆ ।
ಮುಂದೆ ಗಣಪನ ಪೂಜಿಸೆಂದು ಪೇಳೆ ॥
ನಂದದಿಂದಲೆ ನಿಂತು ಪೂಜಿಸಲು ಗಣನಾಥ ।
ಹೊಂದಿಸಿದ ನಿರ್ವಿಘ್ನದಿಂದ ರಾಜ್ಯವನು ॥ ೨ ॥

ಬಂದು ಜನರೆಲ್ಲ ಉಮೆನಂದನನ ಪೂಜಿಸಲು ।
ಚಂದದಿಂದಲಿ ವಾಕು ಶುದ್ಧಿಯಿತ್ತು ॥
ತಂದೆ ಶ್ರೀ ಪುರಂದರಾ ವಿಠಲನ್ನ ಸೇವೆಯೊಳು ।
ಬಂದ ವಿಘ್ನವ ಕಳೆದು ಆನಂದವನೆ ಕೊಡುವ ॥ ೩ ॥

॥ ರಾಗ: ಮುಖಾರಿ. ತಾಳ: ಝಂಪೆ ॥

ಏಕೆ ಈ ದೇಹವನು ದಂಡಿಸುವೆ ವ್ಯರ್ಥ ।
ಏಕಚಿತ್ತದಲಿ ಶ್ರೀ ರಾಮ ರಾಮ ಎನದೆ ॥ ಪಲ್ಲ ॥

ಸ್ನಾನವನು ಮಾಡಿ ನೀ ಧ್ಯಾನಿಸುವೆನೆಂದೆನುತ ।
ಮೌನದಲಿ ಕುಳಿತು ಬಕಪಕ್ಷಿಯಂತೆ ॥

ಹೀನಬುದ್ಧಿಗಳ ಯೋಚಿಸಿ ಕುಳಿತು ಫಲವೇನು ।
ದಾನವಾಂತಕನ ನಾಮಕೆ ಮೌನವುಂಟೇ ॥ ೧ ॥

ಜಪವಮಾಡುವೆನೆಂದು ಕಪಟ ಬುದ್ಧಿಯನೆಣಿಸಿ ।
ಗುಪಿತದಿಂದಲಿ ಕುಳಿತು ಫಲವು ಏನು ॥
ಅಪರಿಮಿತ ಮಹಿಮೆ ಶ್ರೀ ನಾರಾಯಣನ ನಾಮ ।
ಸಫಲವಲ್ಲದೆ ಬೇರೆ ಜಪ ಉಂಟೆ ಮರುಳೆ ॥ ೨ ॥

ಹಿಂದೆ ಅಜಮಿಳಗೆ ಈ ನಾಮದಲಿ ಮುಕ್ತಿಯನು ।
ಚಂದದಿಂ ಕರುಣಿಸಿದುದಿಲ್ಲವೇನು ॥
ಸಂದೇಹವನು ಬಿಟ್ಟು ಒಂದೇ ಮನಸಿನಲಿ ।
ತಂದೆ ಪುರಂದರ ವಿಠಲ ಏನು ಕಂಡ್ಯಾ ಮನುಜ ॥ ೩ ॥

॥ ರಾಗ: ಧನಾಶ್ರಿ. ತಾಳ: ಆದಿ ॥

ರಾಮಮಂತ್ರವ ಜಪಿಸೋ ಹೇ ಮನುಜಾ ॥ ಪಲ್ಲ ॥

ಆ ಮಂತ್ರ ಈ ಮಂತ್ರ ನೆಚ್ಚಿ ನೀ ಕೆಡಬೇಡ ।
ನೇಮದಿಂದಲಿ ಭಜಿಸು ಕಾಮಿತ ಫಲವೀವ ॥ ಅನುಪಲ್ಲ ॥

ಕುಲಹೀನನಾದರೂ ಕೂಗಿ ಜಪಿಸುವ ಮಂತ್ರ ।
ಸಲೆ ಬೀದಿಯೊಳು ಉಚ್ಚರಿಪ ಮಂತ್ರ ॥
ಹಲವು ಪಾಪಂಗಳ ಹತಗೈವ ಮಂತ್ರ ।
ಸುಲಭದಿಂದಲಿ ಸ್ವರ್ಗ ಸೂರೆಗೊಂಬುವ ಮಂತ್ರ ॥ ೧ ॥

ಸ್ನಾನ ಮೌನಂಗಳಿಗೆ ಸಾಧನವು ಈ ಮಂತ್ರ ।
ಮಾನಿನಿಯರು ಮನದಿ ಧ್ಯಾನಿಸುವ ಮಂತ್ರ ॥
ಹೀನ ಗುಣಗಳ ಹಿಂಗಿ ಕಳೆಯುವಾ ಮಂತ್ರ ।
ಏನೆಂಬೆ ವಿಭೀಷಣಗೆ ಪಟ್ಟಗಟ್ಟಿದ ಮಂತ್ರ ॥ ೨ ॥

ಸಕಲ ವೇದಂಗಳಿಗೆ ಸಾರವೆನಿಸುವ ಮಂತ್ರ ।
ಮುಕುತಿ ಮಾರ್ಗಕೆ ಇದುವೆ ಮೂಲ ಮಂತ್ರ ॥
ಭಕುತಿಯ ರಸಕೆಲ್ಲ ಬಟ್ಟೆದೋರುವ ಮಂತ್ರ ।
ಸುಖನಿಧಿ ಪುರಂದರ ವಿಠಲನೆನಿಪಾ ಮಂತ್ರ ॥ ೩ ॥

॥ ರಾಗ: ಬಿಲಹಾರಿ. ತಾಳ: ಝಂಪೆ ॥

ಏಕೆ ನಿರ್ದಯನಾದೆ ಎಲೆ ದೇವನೆ ।
ಶ್ರೀಕಾಂತ ಎನ್ನ ಮೇಲೆಳ್ಳಷ್ಟು ದಯವಿಲ್ಲ ॥ ಪಲ್ಲ ॥
ಕಂಗೆಟ್ಟು ಕಾಲು ಹಿಡತಲೆಯ ನುಗೊತ್ತಿದಾ ।
ಹಿಂಗದೇ ಪ್ರಹ್ಲಾದನಾ ಎತ್ತಿಕೊಂಡೆ ॥
ಮಂಗಳಾಪದವಿತ್ತು ದಾಸನನು ಸಲಹಿದೇ ।
ಭಂಗಾರ ಎಷ್ಟು ಕೊಟ್ಟನು ಹೇಳು ಹರಿಯೇ ॥ ೧ ॥
ಶಿರಿಗೆ ಹೇಳದೆ ಬಂದೆ ಸೆರಗನಳವಡಿಸದೇ ।
ಗರುಡನಾ ಪೆಗಲೇರಿ ಗಮನವಾದೇ ॥
ಭರದಿಂದ ಬಂದು ನೀ ಕರಿಯನುದ್ಧರಿಸಿದೇ ।
ಕರಿರಾಜ ಏನು ಕೊಟ್ಟನು ಹೇಳು ಹರಿಯೇ ॥ ೨ ॥
ಅಜಾಮಿಳನು ಅಣ್ಣನೇ ವಿಭೀಷಣನು ತಮ್ಮನೇ ।
ರುಕುಮಾಂಗದನು ನಿನ್ನ ಮೊಮ್ಮಗನೆ ಹರಿಯೇ ॥
ಅವರೆಲ್ಲ ಹಿತವರೇ ನಾ ನಿನಗೆ ಅಹಿತನೇ ।
ಅಕಳಂಕ ಭರಿತ ಪುರಂದರ ವಿಠಲ ಹರಿಯೇ ॥ ೩ ॥

॥ ರಾಗ: ನಾದನಾಮಕ್ರಿಯ. ತಾಳ: ಆದಿ ॥

ರಾಮನಾಮ ಸದಾ ನುಡಿ ನುಡಿ । ಕಾಮಕ್ರೋದಂಗಳ ಹೊಡಿ ಹೊಡಿ ॥
ಹರಿ ನಿರ್ಮಾಲ್ಯವ ಮುಡಿ ಮುಡಿ । ಪರಮಾಮೃತವನು ಕುಡಿ ಕುಡಿ ॥
ಗುರುಚರಣಗಳನು ಪಿಡಿ ಪಿಡಿ । ಬಂದ ದುರಿತಗಳೆಲ್ಲ ಹೊಡಿ ಹೊಡಿ ॥
ಸುಜನರ ಸಂಗವ ಮಾಡಿ ಮಾಡಿ । ಕುಜನರ ಸಂಗವ ಬಿಡಿ ಬಿಡಿ ॥
ಅರ್ಜುನ ಸಾರಥಿ ರೂಪವ ನೋಡಿ । ಹರಿಭಜನೆಯಲಿ ಮನಸಿಡಿ ॥
ಕರಿರಾಜವರದನ ಸಾರು ಸಾರು । ಶ್ರಮಪರಿಹರಿಸೆಂದು ದೂರು ದೂರು ॥
ಸುರಪುರಿವಾಸನ ಸೇರು ಸೇರು । ಶ್ರೀ ಪುರಂದರವಿಠಲನ ಮರೆಯದಿರು ॥

॥ ರಾಗ: ರೇಗುಪ್ತಿ. ತಾಳ: ಅಷ್ಟತಾಳ ॥

ಈಗ ಮಾಡೆಲೊ ರಾಮಧ್ಯಾನವ ನೀ ಮೂಕನಾಗಿರಬೇಡ ಎಲೆ ಮಾನವಾ ॥
ರಾಘವ ಕೃಷ್ಣಗೋವಿಂದನ ಧ್ಯಾನವು । ಸಾಗುವ ಸಮಯಕೆ ಬರಲಾರ
ದಯ್ಯಾ ॥ ಪಲ್ಲ ॥

ಕಾಲನ ದೂತರು ಕರೆವಾಗ ನೀ ಕಾಲಗೆಟ್ಟು ಕಣ್ಣು ಬಿಡುವಾಗ ।
ನಾಲಿಗೆ ಸೆಳಕೊಂಡು ಜ್ಞಾನಗೆಟ್ಟಿರುವಾಗ ।
ನೀಲವರ್ಣನ ಧ್ಯಾನ ಬರುವುದೇನಯ್ಯಾ ॥ ೧ ॥
ಸತಿಸುತರೆಂಬುವ ಸಂದಣಿಯೊಳು ನೀ ।
ಮತಿಭ್ರಷ್ಟನಾಗಿ ಮನದೊಳು ।
ಸತತ ಶ್ರೀ ಲಕುಮಿಯ ಪತಿಯನು ನೆನೆದರೆ ಸ ।
ದ್ಗತಿಯು ಸನ್ಮಾರ್ಗ ಪರಪದವಿ ಈವನಯ್ಯಾ ॥ ೨ ॥
ಸಿರಿವಂತನೆಂದೆಂಬ ಮನದಲ್ಲಿ ।
ಹರಿಸ್ಮರಣೆಯನೆಸಗದೆ ಮನದಲ್ಲಿ ।
ಮರಣವೈತರುವಾಗ ಸ್ಥಿರಬುದ್ಧಿಯಿಂದ ನೀ ।
ಪುರಂದರ ವಿಠಲನ ಸ್ಮರಿಸು ಭಕ್ತಿಯೊಳಯ್ಯಾ ॥ ೩ ॥

॥ ರಾಗ: ಪಂತುವರಾಳಿ. ತಾಳ: ಏಕತಾಳ ॥

ರಾಮನಾಮ ಪಾಯಸಕ್ಕೆ ಕೃಷ್ಣನಾಮ ಸಕ್ಕರೆ ॥
ವಿಠಲನಾಮ ತುಪ್ಪ ಬೆರಸಿ ಬಾಯ ಚಪ್ಪರಿಸಿರೋ ॥ ಪಲ್ಲ ॥
ಬಮ್ಮನ ಗೋದಿಯ ತಂದು ವೈರಾಗ್ಯ ಕಲ್ಲಲಿ ಬೀಸಿ ।
ಸುಮ್ಮನೆ ಸಜ್ಜಿಗೆ ತೆಗೆದು ಶ್ಯಾವಿಗೆಯ ಮಾಡಿರೋ ॥ ೧ ॥
ಹೃದಯವೆಂಬ ಪಾತ್ರದಲ್ಲಿ ಭಾವವೆಂಬ ಹೆಸರನಿಕ್ಕಿ ।
ಬುದ್ಧಿ ಪಾಕ ಮಾಡಿ ಆನಿ । ರುದ್ಧ ಹರಿಯ ನೆನೆಯಿರೋ ॥ ೨ ॥
ಆನಂದಾನಂದದಿಂದ ತೇಗಬಂದಾಗವೆರಡು ।
ಆನಂದಮೂರುತಿ ಪುರಂದರ ವಿಠಲನ ನೆನೆಯಿರೋ ॥ ೩ ॥

॥ ರಾಗ: ಖಮಾಸ್. ತಾಳ; ರೂಪಕ ॥

ರಾಮಗೋವಿಂದ ಹರೇ । ಕೃಷ್ಣಮುಕುಂದ ಹರೇ ॥ ಪಲ್ಲ ॥
ತೃಪ್ತಿಯಹುದೆ ಹೆತ್ತ ತಾಯಿ ನೀಡದನಕ ।
ಭಕ್ತಿಯಹುದೆ ಭಾವಶುದ್ಧಿ ವಿಲ್ಲದನಕ ।
ಮುಕ್ತಿಯಹುದೆ ಭಕ್ತಜನರ ಸೇರದನಕ ।
ಚಿತ್ತ ಶುದ್ಧವಹುದೆ ನಿಜವನರಿಯದನಕ ॥ ೧ ॥

ನಳಿನವಿದ್ದರೇನು ತುಂಬಿ ಎರಗದನಕ |
ದಳವುಯಿದ್ದರೇನು ಧೈರ್ಯಗೊಡದನಕ |
ಚಲುವನಾದರೇನು ಮಿತ್ರರಿಲ್ಲದನಕ |
ಲಲನೆಯಿದ್ದರೇನು ಗುಣವನರಿಯದನಕ ॥ ೨ ॥

ಮದವಿದೇಕೆ ಮನದಿ ಜ್ಞಾನವಿಲ್ಲದನಕ |
ಕಾದಲೇಕೆ ಭುಜದ ಸತ್ವಗೂಡದನಕ |
ನಾದವ್ಯಾಕೆ ಚಿಂಹ್ವೆ ಸ್ತೋತ್ರವಿಲ್ಲದನಕ |
ರಾಗವೇಕೆ ಗತಿಗಮಕೆ ಇಲ್ಲದನಕ ॥ ೩ ॥

ಧನವು ಇದ್ದರೇನು ಧರ್ಮವ ಮಾಡದನಕ |
ಮನೆಯು ಇದ್ದರೇನು ಅತಿಥಿಗಿಕ್ಕದನಕ |
ತನುವು ಇದ್ದರೇನು ಪರರಿಗೊದಗದನಕ |
ಮನವು ಇದ್ದರೇನು ಹರಿಯ ನೆನೆಯದನಕ ॥ ೪ ॥

ಹರಿಯ ನಾಮವಿರಲು ಅನ್ಯ ದೈವವೇತಕೆ |
ಹರಿಯ ಭಜಿಸುತಿರಲು ಅನ್ಯ ನೆನೆಯಲೇತಕೆ |
ಹರಿಯು ವೊಲಿದ ಮನುಜರಿಂಗೆ ವನವದೇತಕೆ |
ಪುರಂದರ ವಿಠಲನಿರಲು ಭವದ ಭಯವಿನ್ನೇತಕೆ ॥ ೫ ॥

॥ ರಾಗ| ಮಾಳವಿ. ತಾಳ: ಏಕತಾಳ ॥

ಯಮನೆಲ್ಲ್ಯಾ ಕಾಣನೆಂದು ಹೇಳಬ್ಯಾಡ |
ಯಮ ರಾಮಚಂದ್ರನೇ ಸಂದೇಹ ಬ್ಯಾಡ ॥ ಪಲ್ಲ ॥

ನಂಬಿದ ವಿಭೀಷಣಗೆ ರಾಮನಾದ |
ನಂಬದಿದ್ದ ರಾವಣನಿಗೆ ಯಮನಾದ ॥ ೧ ॥

ನಂಬಿದ ಅರ್ಜುನನಿಗೆ ಬಂಟನಾದ |
ನಂಬದಿದ್ದ ಕೌರವನಿಗೆ ಕಂಟಕನಾದ ॥ ೨ ॥

ನಂಬಿದ ಉಗ್ರಸೇನನಿಗೆ ಮಿತ್ರನಾದ |
ನಂಬದಿದ್ದ ಕಂಸನಿಗೆ ಶತ್ರುವಾದ ॥ ೩ ॥

ನಂಬಿದ ಬಾಲಕನಿಗೆ ಹರಿಯಾದ ।
ನಂಬದಿದ್ದ ಅವನ ಪಿತನಿಗೆ ಅರಿಯಾದ ॥ ೪ ॥
ನಂಬಿದವರ ಸಲಹುವ ನಮ್ಮ ದೊರೆಯು ।
ಅಂಬುಜಾಕ್ಷ ಪುರಂದರ ವಿಠಲರಾಯನು ॥ ೫ ॥

॥ ರಾಗ: ಕಲ್ಯಾಣಿ. ತಾಳ: ಅಷ್ಟತಾಳ ॥

ಕರುಣಿಸೆನಗೆ ಕೃಷ್ಣಾ ಕರುಣಿಸಯ್ಯಾ ।
ಮರಣಕಾಲಕೆ ನಿನ್ನ ಸ್ಮರಣೆ ಒದಗುವಂತೆ ॥ ಪಲ್ಲ ॥
ರುಕುಮಾಂಗದನಂತೆ ವ್ರತವ ನಾನರಿಯೆನು ।
ಶುಕಮುನಿಯಂತೆ ನಾ ಸ್ತುತಿಸಲರಿಯೆ ।
ಬಕವೈರಿಯಂತೆ ನಾ ಪೂಜಿಸಲರಿಯೆನು ।
ದೇವಕಿಯಂತೆ ಪೊತ್ತು ಮುದ್ದಿಡಲರಿಯೆ ॥ ೧ ॥
ಗರುಡನಂತೆ ಪೊತ್ತು ತಿರುಗಲಾರೆನು ದೇವ ।
ಸುರಮುನಿಯಂತೆ ನಾ ಸ್ತುತಿಸಲರಿಯೆ ।
ವರ ಕಪಿಯಂತೆ ಸೇವೆಯ ಮಾಡಲರಿಯೆನು ।
ಸಿರಿಯಂತೆ ನಿನ್ನ ಮನಮೆಚ್ಚಿಸಲರಿಯೆ ॥ ೨ ॥
ಬಲಿಯಂತೆ ದಾನವನೀಯಲಾರೆನು ರಂಗ ।
ಛಲ ಪ್ರಹ್ಲಾದನವೊಲ್ ದೃಢಚಿತ್ತವರಿಯೆ ।
ಒಲಿಸುವದಕ್ಕಿನ್ನು ಪಾರ್ಥನೆಂತರಿಯೆನು ।
ಸಲಹು ಶ್ರೀ ಪುರಂದರ ವಿಠಲ ದಮ್ಮಯ್ಯಾ ॥ ೩ ॥

॥ ರಾಗ: ಆನಂದ ಭೈರವಿ. ತಾಳ: ಅಟತಾಳ ॥

ಹಿಡಕೋ ಬಿಡಬ್ಯಾಡಿ ರಂಗಯ್ಯನ ॥ ಪಲ್ಲ ॥
ಹಿಡಕೋ ಬಿಡಬ್ಯಾಡಿ ಕೆಡುಕ ಕಾಳಿಂಗನಾ ।
ತುಡುಕಿ ತುಡುಕಿ ಮಡು ಕಲಕಿದ ಕೃಷ್ಣನಾ ॥ ೧ ॥
ಮಕ್ಕಳೊಳಗೆ ಲಂಡ ಮನೆಮನೆಗಳ ಪೊಕ್ಕು ।
ಸಕ್ಕರೆ ನೊರೆಹಾಲಾ ತಿಂದವನಾ ।

ಶಿಕ್ಕದ ಮೇಲಿಟ್ಟ ಬೆಣ್ಣೆಯು ತಾ ಮೆದ್ದು ।
ಸಿಕ್ಕಸಿಕ್ಕದಂತೆ ಓಡುವ ಕೃಷ್ಣನಾ ॥ ೨ ॥

ಆನೆಯು ಕೆಡಹಿದ ಅಗಸನ ಮಡುಹಿದ ।
ಸತ್ರಾಜಿತನಿಗೆ ವರವಿತ್ತನಾ ।
ಅತ್ರಿಮುನೀಶ್ವರನ ಆರ್ತಿಯಂ ಸಲಹಿದ ।
ಸತ್ಯಭಾಮೆಯು ಕಾಂತ ನಿತ್ಯವಿನೋದನಾ ॥ ೩ ॥

ಜೀರಿಗೆ ಬೆಲ್ಲವು ಪಿಡಿದು ಅಂಬಿಕೆಯೊಳು ।
ಸ್ವಾರಿ ಬರುವ ರುಕ್ಮಿಣಿಯು ಕಂಡು ।
ಹಾರಿಹೋಗಿ ಬೇಗ ಆ ರುಕುಮಯ್ಯಗೆ ।
ತೇರಿಗೆ ಕಟ್ಟಿದ ಜಾರನ ಚೋರನ ॥ ೪ ॥

ನರಗುರಿ ದೇಹವು ಸ್ಥಿರವೆಂದು ನೆಚ್ಚದೇ ।
ಮರತಿಯಾ ಹೆಡತಲೆ ಮೃತ್ಯುವಿನಾ ।
ವರ ಪ್ರಹ್ಲಾದ ಪಾಂಚಾಲಿಯು ಸಲಹಿದ ।
ವರದ ಶ್ರೀ ಪುರಂದರ ವಿಠಲರಾಯನಾ ॥ ೫ ॥

॥ ರಾಗ; ಕಾಂಬೋದಿ. ತಾಳ: ತ್ರಿವುಡೆ ॥

ಎಂದೆಂದೂ ನಿನ್ನ ಪಾದವೆ ಗತಿ ಎನಗೆ ।
ಗೋವಿಂದ ಬಾರೆನ್ನ ಹೃದಯು ಮಂದಿರಕೆ ॥ ಪಲ್ಲ ॥

ಹಿಂದೆ ನಾ ಬಹುಭಾರಗಳಿಂದ ಬಂದೆ ।
ಇದರಿಂದ ಗೆಲಿದುಹೋಗುವ ಕಾಣೆ ಮುಂದೆ ।
ತುದಿಮೊದಲಿಲ್ಲದ ಪ್ರಾಣಿ ನಾ ಕೊಂದೆ ।
ಪದುಮನಾಭ ರಕ್ಷಣೆ ಮಾಡೋ ತಂದೆ ॥ ೧ ॥

ಹೆಣ್ಣು ಹೊನ್ನು ಮಣ್ಣಿನಾಸೆಗೆ ಬಿದ್ದು ।
ಪುಣ್ಯವೆಂಬುದ ನಾ ತಿಳಿಯದೆ ಇದ್ದು ।
ಅನ್ಯಾಯವಾಯಿತು ಅದಕೇನು ಮದ್ದು ।
ನಿನ್ನಯು ಧ್ಯಾನವು ಹೃದಯದೊಳಿದ್ದು ॥ ೨ ॥

ಹಿಂದೆ ನಾ ಮಾಡಿದಾ ಪಾಪವನು ಕಳೆದು ।
ಮುಂದೆನ್ನ ಜನ್ಮವು ಸಾಫಲ್ಯವೆಂದು ।
ತಂದೆ ಶ್ರೀ ಪುರಂದರ ವಿಠಲನ ನೆನೆದು ।
ಎಂದೆಂದಿಗೂ ಸುಖ ಆನಂದ ಪಡೆದು ॥ ೩ ॥

॥ ರಾಗ: ಸುರುಟಿ. ತಾಳ: ಆಟತಾಳ ॥

ಮನೆಯೊಳಗಾಡೋ ಗೋವಿಂದ । ನೀನು ।
ನೆರೆಮನೆಗಳಿಗೆ ಹೋಗುವದೇನು ಚಂದಾ ॥ ಪಲ್ಲ ॥

ನೊಸಲಿಗೆ ತಿಲಕವನೀಡುವೆ । ಅಚ್ಚ ।
ಹೊಸ ಬೆಣ್ಣೆಯನಿಕ್ಕಿ ಕಜ್ಜಾಯ ಕೊಡುವೆ ।
ಹಸನಾದಾಭರಣಗಳಿಡುವೆ । ಮುದ್ದು ।
ಪಸುಳೆ ನಿನ್ನಯ ನೋಡಿ ಸಂತೋಷಪಡುವೆ ॥ ೧ ॥

ಅಣ್ಣಯ್ಯ ಬಲರಾಮ ಸಹಿತ । ನೀನು ।
ಅಲ್ಲಲ್ಲಿ ತಿರುಗಾಡುವದೇನು ವಿಹಿತಾ ।
ಹೆಣ್ಣುಗಳ್ಯಾಕೋ ಸಂಗಾತ । ಎನ್ನ ।
ಬಿನ್ನಪವನು ಪರಿಪಾಲಿಸೋ ಮಾತ್ರ ॥ ೨ ॥

ಚೋರನೆನಸಿಕೊಳ್ಳಲ್ಯಾಕೋ । ಲಕ್ಷ್ಮೀ ।
ನಾರಾಯಣನೆಂಬ ಬಿರುದು ನಿನಗ್ಯಾಕೊ ॥
ವಾರಿಜಾಕ್ಷಿಯರ ಕೂಟ ಸಾಕೋ । ನಮ್ಮ ।
ಪುರಂದರ ವಿಠಲ ಮನೆಯೊಳಗಾಡಬೇಕೊ ॥ ೩ ॥

॥ ರಾಗ: ಸಾವೇರಿ. ತಾಳ: ಚಾಪು ॥

ನಾನಿನ್ನೊಳನ್ಯ ಬೇಡುವುದಿಲ್ಲ ।
ಎನ್ನ ಹೃದಯದೊಳ್ನಿಂದಿರು ಶ್ರೀ ಹರಿಯೇ ॥ ಪಲ್ಲ ॥

ಶಿರ ನಿನ್ನ ಚರಣದೊಳೆರಗಲಿ । ಚಕ್ಷು ।
ದಣಿಯೆ ದಣಿಯೆ ನಿನ್ನ ನೋಡಲಿ ।
ನಾಸಿಕ ನಿರ್ಮಾಲ್ಯ ಗ್ರಹಿಸಲಿ । ಎನ್ನ ।
ಶ್ರೋತ್ರ ನಿನ್ನಯ ಕಥೆ ಕೇಳಲಿ ಹರಿಯೇ ॥ ೧ ॥

ನಾಲಿಗೆ ನಿನ್ನ ಕೊಂಡಾಡಲಿ । ಎನ್ನ ।
ಕಂಗಳೆರಡು ಕೈಯು ಮುಗಿಯಲಿ ।
ಪಾದ ತೀರ್ಥಯಾತ್ರೆ ಮಾಡಲಿ ! ಎನ್ನ ।
ಮನ ನಿನ್ನ ಅನುದಿನ ಸ್ಮರಿಸಲಿ ಹರಿಯೆ ॥ ೨ ॥

ಬುದ್ಧಿ ನಿನ್ನೊಳು ನಲಿದಾಡಲಿ । ಎನ್ನ ।
ಚಿತ್ತ ನಿನ್ನೊಳು ಮುಳುಗಾಡಲಿ ।
ಭಕ್ತ ಜನರ ಸಂಗವಾಗಲಿ ।
ಶ್ರೀ ಪುರಂದರ ವಿಠಲನ ದಯ ನಮಗಿರಲಿ ॥ ೩ ॥

॥ ರಾಗ: ಭೈರವಿ. ಆದಿತಾಳ ॥

ಯಾಕೆ ದಯಬಾರದೋ ಲೋಕನಾಯಕ !
ನಿನಗಿನ್ನ್ಯಾಕೆ ದಯಬಾರದೋ ॥ ಪಲ್ಲ ॥

ಇಂದಿರೇಶ ನಿಮ್ಮ ಪಾದದ್ವಂದ್ವವ ನಂಬಿದೆನಯ್ಯಾ !
ಬಂದು ಸಲಹೋ ಬೇಗದಿಂದ ನಂದಗೋಪ ಕಂದ ನಿನಗೆ ॥ ೧ ॥

ಸೃಷ್ಟಿಯೊಳಗೆ ನಿನಗೆ ಎಳ್ಳಷ್ಟು ಕರುಣ ಬಾರದ್ಯಾಕೋ !
ಸಿಟ್ಟ್ಯಾಕೋ ಎನ್ನ ಮೇಲೆ ಮುಷ್ಟಿಮರ್ದನ ಕೃಷ್ಣ ನಿನಗೆ ॥ ೨ ॥

ಅಷ್ಟ ಸ್ತ್ರೀಯರ ಪತಿ ಎನ್ನ ಕಷ್ಟವ ಪರಿಹರಿಸೋ ಮುನ್ನ ।
ಬೆಟ್ಟಲಿ ಬೆಟ್ಟವನೆತ್ತಿದ ಧಿಟ್ಟ ಶ್ರೀ ಗೋಪಾಲ ನಿನಗೆ ॥ ೩ ॥

ವಾಸುಕಿಯ ಶಯನನೆ ಎನ್ನ ದೋಷವ ಪರಿಹರಿಸೊ ಇನ್ನು ।
ದಾಸ್ಯವಿತ್ತು ನೋಡೋ ಅಂಜನಾದ್ರೀಶ ಶ್ರೀನಿವಾಸ ನಿನಗೆ ॥ ೪ ॥

ಅರವಿಂದಾಕ್ಷ ನೀನೆ ಯೆನಗೆ ಸರುವ ಬಳಗ ಬಂಧು ಭಾಗ್ಯ !
ಅರಿಯೆ ಪರಾಕ್ರಮವ ಬೇಗೆ ಪುರಂದರ ವಿಠಲ ನಿನಗೆ ॥ ೫ ॥

॥ ರಾಗ: ಆರಬಿ. ತಾಳ: ಅಷ್ಟತಾಳ ॥

ಕೃಷ್ಣನ ನೆನದರೆ ಕಷ್ಟ ಬಂದಿಷ್ಟಿಲ್ಲ । ಕೃಷ್ಣಾ ಎನಬಾರದೇ ॥ ೧ ॥
ನರಜನ್ಮ ಬಂದಾಗ ನಾಲಿಗೆ ಇರಲಾಗ । ಕೃಷ್ಣಾ ಎನಬಾರದೇ ॥ ೨ ॥
ಮಲಗೆದ್ದು ಮೈಮುರಿದು ಏಳುತಾಗಲೊಮ್ಮೆ । ಕೃಷ್ಣಾ ಎನಬಾರದೇ ॥ ೩ ॥

ಮೇರೆ ಇಲ್ಲದೆ ಮಾತನಾಡುವಾಗಲೊಮ್ಮೆ । ಕೃಷ್ಣಾ ಎನಬಾರದೇ ॥ ೪ ॥
ದಾರಿಯ ನಡೆವಾಗ ಭಾರವ ಹೊರುವಾಗ । ಕೃಷ್ಣಾ ಎನಬಾರದೇ ॥ ೫ ॥
ಗಂಧವ ಪೂಸಿ ತಾಂಬೂಲವ ಮೆಲುವಾಗ ಕೃಷ್ಣಾ ಎನಬಾರದೇ ॥ ೬ ॥
ಮಂದಗಮನೆಯ ಕೂಡಿ ಸರಸವಾಡುತಲೊಮ್ಮೆ । ಕೃಷ್ಣಾ ಎನಬಾರದೇ ॥೭॥
ಪರಿಪರಿ ಹಾಸ್ಯವ ಮಾಡುತಲೊಮ್ಮೆ । ಕೃಷ್ಣಾ ಎನಬಾರದೇ ॥ ೮ ॥
ಕಂದನ ಬಿಗಿದಪ್ಪಿ ಮುದ್ದಾಡುತಲೊಮ್ಮೆ । ಕೃಷ್ಣಾ ಎನಬಾರದೇ ॥ ೯ ॥
ಭೋಗ ಪಡೆದು ಅನುರಾಗದಲ್ಲಿರುವಾಗ । ಕೃಷ್ಣಾ ಎನಬಾರದೇ ॥ ೧೦ ॥
ದುರಿತ ರಾಶಿಗಳನ್ನು ತರಿದು ಬಿಸುಡುವಾಗ । ಕೃಷ್ಣಾ ಎವಬಾರದೇ ॥ ೧೧ ॥
ಗರುಡವಾಹನ ಶ್ರೀ ಪುರಂದರ ವಿಠಲನ್ನ । ಕೃಷ್ಣಾ ಎನಬಾರದೇ ॥ ೧೨ ॥

॥ ರಾಗ: ಸೌರಾಷ್ಟ್ರ. ತಾಳ: ಅಷ್ಟತಾಳ ॥

ಏನೆಂತೊಲಿವೆ ನಿನ್ನವರಂತೆ ಕೆಡುಬುದ್ಧಿ ಎನ್ನೊಳಿಲ್ಲಾ ।
ದೀನಜನರ ಪಾಲಿಪ ಬುದ್ಧಿ ನಿನ್ನೊಳಿಲ್ಲಾ ॥ ೧ ॥
ತರಳ ಪ್ರಹ್ಲಾದನೋಲ್ ನಾ ನಿನ್ನ ರೂಪವ ಕೆಡಿಸಲಿಲ್ಲ ।
ಧೀರ ನರನಂತೆ ತನ್ನ ಭಂಡಿಯ ಭೋವಿಯನೆ ಮಾಡಿ ಮೆರೆಯಲಿಲ್ಲ ॥ ೨ ॥
ವರ ಅಂಬರೀಶನಂತೀರ್ಗೈದು ಜನ್ಮವ ಬರಿಸಲಿಲ್ಲಾ ।
ಮತ್ತೆ ಮಾರುತಜನಂತೆ ನಿನ್ನಯ ಉಣಲುಡೆಯ ಕೊಂಡೋಡಲಿಲ್ಲಾ ॥ ೩ ॥
ಸುರನದಿ ಸುತನಂತೆ ಫಣಿಯೊಳು ಬಾಣವ ನಡೆಸಲಿಲ್ಲಾ । ಪರಾ ।
ಶರನಂತೆ ನದಿಯೊಳಂಬಿಗನ ಹೆಣ್ಣನು ಕಂಡು ಮೆಚ್ಚಲಿಲ್ಲಾ ॥ ೪ ॥
ಸುರಮುನಿಯಂತೆ ಕಂಡವರ ಕೊಂಡೆಯಃ ಮಾತ ಕೇಳಲಿಲ್ಲಾ । ನೃಪ ।
ವರ ರುಕುಮಾಂಗದನಂತೆ ಸುತನ ಕೊಲ್ಲಲೆಣಿಸಲಿಲ್ಲಾ ॥ [illegible] ॥
ಧರೆಯೊಳು ವಿಭೀಷಣನಂತೆ ತನ್ನಣ್ಣನ ಕೊಲಿಸಲಿಲ್ಲಾ । ಮತ್ತೆ ।
ತರಳೆ ದ್ರೌಪದಿಯಂತೆ ಶಾಕಪತ್ರವನೊಡ್ಡಿ ಮೆಲಿಸಲಿಲ್ಲಾ ॥ ೬ ॥
ವರ ಪುಂಡಲೀಕನಂತೀಟಿಯ ಮೇಲೆ ನಾನಿಲಿಸಲಿಲ್ಲಾ ।
ಚಲ್ವ ಶ್ರೀ ಪುರಂದರ ವಿಠಲ ನಿನ್ನಯ ಕೃಪೆಯುನ್ನೊಳಿಲ್ಲಾ ॥ ೭ ॥

|| ರಾಗ: ಯದುಕುಲ ಕಾಂಬೋದಿ. ತಾಳ: ತ್ರಿವುಡೆ ||

ಎಂಥಾ ಪುಣ್ಯವೆ ಗೋಪಿ ಎಂಥಾ ಭಾಗ್ಯವೆ ನಿನಗೆ |
ಅಂಥಾ ಮಗನ ಕಾಣೆರೆ ಕೇಳೆಲೆ ಯಶೋದೆ || ಪಲ್ಲ ||

ಚಿಂತಿಸಿದರು ದೊರಕ ಚಲುವ ಗೋಪಾಲ ರಾಜ |
ಭ್ರಾಂತಿ ಮಾತುಗಳಲ್ಲವೆ ಹುಸಿಯಲ್ಲ ಕೇಳು || ಅನುಪಲ್ಲ ||

ಊರೊಳಗೆ ನಮ್ಮ ಅಂಜಿಕೆತನವಿಲ್ಲ ದೂರುಕೊಂಬುವರೆಲ್ಲರು |
ಅರಣ್ಯದೊಳಗವನಾಡುವ ನಾಟ್ಯಗಳು ಅರಿಗಾದರು ಉಂಟೆನೇ
ಕೇಳೆಲೆ ಯಶೋದೆ || ೧ ||

ಸರಸಿಜನಾಭನೆ ಬಾರೆಂದು ಕರೆದರೆ | ದುರಿತ ಪೋಪುವದಲ್ಲದೆ
ಸರಸದಿಂದಲಿ ನಾವು ಸವಿಮಾತನಾಡಿದರೆ
ಹರುಷವು ಕೈಎಡಿತೇ | ಕೇಳೆಲೆ ಯಶೋದೆ || ೨ ||

ನಿನ್ನ ಮಗನ ಕರೆಯೆ ಎನ್ನ ಪ್ರಾಣೇಶನೇ |
ಪುಣ್ಯದ ಫಲವು ಕಾಣೆ |
ಚನ್ನ ಶ್ರೀ ಪುರಂದರ ವಿಠಲರಾಯನ |
ಯಸ್ನಾಣೆ ಬಿಡಲಾರೆ | ಕೇಳೆಲೆ ಯಶೋದೆ || ೩ ||

|| ರಾಗ: ದೇಶೀ ತೋಡಿ. ತಾಳ: ಅದಿತಾಳ ||

ಅಳುವದ್ಯಾತಕೋ ರಂಗ | ಅತ್ತರಂಜಿಪ ಗುಮ್ಮಾ |
ನಳಿನನಾಭನೆ ನಿನ್ನ ಪಾಡುತ ಪೊಗಳುತ |
ಸೆರಗಿಡಿದಪ್ಪಿ ಗೋಪಿ | ಹೇ ರಂಗಯ್ಯಾ || ಪಲ್ಲ ||

ಹುಟ್ಟಿದೇಳು ದಿನದಲ್ಲಿ ದುಷ್ಟ ಪೂತನಿಯ ಕೊಂದೆ |
ಮುಟ್ಟಿ ಮೊಲೆಯ ಹಾಲನುಂಡ ಕಾರಣದಿಂದ |
ದೃಷ್ಟಿ ತಾಗಿತೆ ನಿನಗೆ ಹೇ ರಂಗಯ್ಯಾ || ೧ ||

ಬಾಲಕತನದಲ್ಲಿ ಗೋಪಾಲರೊಡನಾಡಿ |
ಕಾಳಿಯ ಮಡುವನು ಕಲಕಿದ ಬಗೆಯಿಂದ |
ಹಾವು ಕಚ್ಚಿತೆ ನಿನಗೆ ಹೇ ರಂಗಯ್ಯಾ || ೨ ||

ವಸುದೇವ ಸುತನೆನಿಸಿ ಅಸುರ ಕಂಸನ ಕೊಂದೆ।
ಹೆಸರುಗ ಮಲ್ಲರ ಮಡುಹಿದ ಕಾರಣ ।
ಕೆಸರು ತಾಗಿತೆ ನಿನಗೆ । ಹೇ ರಂಗಯ್ಯಾ ॥ ೩ ॥

ತುರುವ ಕಾವರೆ ಹೋಗಿ ಭರದಿಂದ ಮಳೆ ಸುರಿಯೆ ।
ಬೆರಳೊಳು ಬೆಟ್ಟವ ನೆಗಹಿದ ಕಾರಣ ।
ಬೆರಳುಳುಕಿತೆ ನಿನಗೆ । ಹೇ ರಂಗಯ್ಯಾ ॥ ೪ ॥

ಶರಣೆನ್ನಿ ವೇಲಾಪುರದ ಚಲುವ ಚನ್ನಿಗರಾಯ ।
ಕರುಣದಿ ಭಕ್ತರ ಸಲಹುವ ಕಾರಣ ।
ಗುರು ಪುರಂದರ ವಿಠಲಾ । ಹೇ ರಂಗಯ್ಯಾ ॥ ೫ ॥

ರಾಗ: ಮೋಹನ ಕಲ್ಯಾಣಿ. ತಾಳ: ಅಷ್ಟತಾಳ ॥

ಸ್ಮರಣೆ ಒಂದೇ ಸಾಲದೇ । ಗೋವಿಂದನ ।
ಭಜನೆ ಒಂದೇ ಸಾಲದೇ ॥ ॥ ಪಲ್ಲ ॥
ಪರಿಪರಿ ವಿಧದಲಿ ಭ್ರಾಂತಿಗೊಳ್ಳಲು ಬೇಡ ।
ಪರಮಪುರುಷನೆಂದು ನೆರೆನಂಬಿದಾತಗೆ ॥ ಅನುಪಲ್ಲ ॥

ಪಾತಕಿಯಾದರೇನು, ಸರ್ವಪ್ರಾಣಿ ।
ಘಾತಕಿಯಾದರೇನು ॥
ಕಾತುರದಲಿ ದುಷ್ಕರ್ಮಿಯಾದರೇನು ।
ಪ್ರೀತಿಯಿಂದಜಾಮಿಳನ ಸಲಹಿದ ಹರಿಯ ॥ ೧ ॥

ಕಡು ಮೂರ್ಖನಾದರೇನು । ದುಷ್ಕರ್ಮವು ।
ಕೊಡದಾತನಾದರೇನು ॥
ಜಡನಾದರೇನಲ್ಪ ಜಾತಿಯಾದರೇನು ।
ಬಿಡದೆ ಪ್ರಹ್ಲಾದನ ಸಲಹಿದ ಹರಿಯ ॥ ೨ ॥

ಸಕಲ ಪುಣ್ಯಕ್ಷೇತ್ರವು । ಮಾಡಿದಂಥ ।
ಅಖಿಳ ಪುಣ್ಯದ ಫಲವು ।
ಭಕುತಿಪೂರ್ವಕವಾಗಿ ಬಿಡದನುದಿನದಲ್ಲಿ ।
ಪ್ರಕಟ ಶ್ರೀ ಪುರಂದರಾ ವಿಠಲನ ನಾಮದಾ ॥ ೩ ॥

|| ರಾಗ: ಯಮುನಾ ಕಲ್ಯಾಣಿ. ತಾಳ: ಆದಿತಾಳ ||

ಗುಣವಾಯಿತೆನ್ನ ಭವರೋಗ | ಕೃಷ್ಣನೆಂಬ ವೈದ್ಯನು
ದೊರಕಿದನು || ಗುಣವಮಾಡುವರಿಗೆ ಎಣೆಯಿಲ್ಲ |
ಗುಣವಂತನಾದನು ಅಪ್ಪೃತಹಸ್ತೇಷು || ೧ ||

ಸಂತತ ಹರಿಭಕ್ತಿ ಅನುಪಾನಾ | ಸಂತತ ಗುರು
ಭಕ್ತಿ ಮರುಪಾನಾ | ಸಂತತ ಶ್ರವಣವು ಕಠಿಣ ಪಥ್ಯ |
ಸಂತತ ಕೀರ್ತನ ಉಷ್ಣೋದಕ || ೨ ||

ಚಂದ್ರೋದಯು ಉಂಟು ಈತನಲ್ಲಿ | ಚಿಂತಾಮಣಿಯುಂಟು
ಈತನಲ್ಲಿ | ಸಂಚಿಯೊಳಗೆ ತುಂಬ ಮಾತ್ರೆಗಳುಂಟು |
ಚೆನ್ನಾಗಿ ಗುಣವಮಾಡುವನೀತ || ೩ ||

ಶ್ರೀಗುರು ಸ್ಮರಣೆಯು ಶುಂಠಿ ಮೆಣಸು |
ಹರಿ ದಿವ್ಯ ನಾಮವು ಸಾರನ್ನಾ | ಗುರುಪಾದ ಸೇವೆಯು
ಶ್ರೀ ಸಾರು | ಹರಿಪಾದೋದಕ ಗೋಘೃತವು || ೪ ||

ಸಹಸ್ರ ನಾಮದಿ ನೀ ವಂದ್ಯ| ಸಕಲ ಸ್ವತಂತ್ರಕೆ
ನೀ ಬಾಧ್ಯ | ಹರಿ ಸರ್ವೋತ್ತಮ ನೀ ವೈದ್ಯ |
ಪುರಂದರ ವಿಠಲನೆ ನೀ ಬೋಧ್ಯ || ೫ ||

|| ರಾಗ: ಧನಾಶ್ರೀ. ತಾಳ: ಆದಿತಾಳ ||

ಹರಿನಾಮ ಕೀರ್ತನೆ ಅನುದಿನ ಮಾಳ್ಪಗೆ |
ನರಕಭಯುಗಳುಂಟೇ || ಪಲ್ಲ ||

ನಾಮ ಹಿಂದೆ | ಯಮನಾಳ್ಗಳನೊದೆದು |
ಅಜಾಮಿಳಗೆ ಸುಕ್ಷೇಮವಿತ್ತ ಶ್ರೀಹರಿ || ಅನುಪಲ್ಲ ||

ಕೇಸರಿಗಂಜದ ಮೃಗ ಉಂಟೇ |
ದಿನೇಶನಿಗಂಜದ ತಮ ಉಂಟೇ |
ವಾಸುದೇವ ವೈಕುಂಠ ಜಗನ್ಮಯ |
ಕೇಶವ ಕೃಷ್ಣ ನೀನೆಂದುಚ್ಚರಿಸುವ || ೧ ||

ಕುಲಿಶಗೆ ಯೆದುರಿಪ್ಪ ಗಿರಿಯುಂಟೇ ।
ಖಲುಪ್ರಳಯ ಬಂದಾಗ ಜೀವಿಪರುಂಟೇ ।
ಜಲಜನಾಭ ಗೋವಿಂದ ಜನಾರ್ಧನ ।
ಕಲುಶ ಹರಣ ಕರಿರಾಜ ರಕ್ಷಕನೆಂಬೋ ॥ ೨ ॥

ಗರುಡನಿಗಂಜದ ಫಣಿಯುಂಟೇ ।
ಥಳ್ಳುರಿಯಲ್ಲಿ ಬೇಯದ ತೃಣ ಉಂಟೇ ।
ನರಹರಿ ನಾರಾಯಣ ಕೃಷ್ಣ ಕೇಶವ
ಪುರಂದರ ವಿಠಲ ನೀನೆಂದುಚ್ಚರಿಸುವ ॥ ೩ ॥

॥ ರಾಗ: ಮುಖಾರಿ. ತಾಳ: ಝಂಪೆ ॥

ಏನೆ ಮರುಳಾದೆ ನೀ ಎಲೆ ರುಕ್ಮಿಣಿ ।
ಹೀನ ಗೋವಳ ಗೊಲ್ಲ ಗೋಪಾಲ ಕೃಷ್ಣಗೆ ॥ ಪಲ್ಲ ॥

ಹಾಸಿಗಿಲ್ಲದೆ ಹಾವಿನ ಮೇಲೆ ಪವಡಿಸಿದ ।
ಹೇಸಿಗಿಲ್ಲದೆ ಕರಡಿ ಮಗಳ ಕೂಡಿ ।
ಗ್ರಾಸಕಿಲ್ಲದೆ ತೊತ್ತು ಮಗನ ಮನೆಯಲಿ ಉಂಡ ।
ದೋಷಕಂಜದೆ ಮಾತುಳ ಶಿರವ ತರಿದವಗೆ ॥ ೧ ॥

ಮಂಡೆ ಗೋಳಕರ ಮನೆ ದೈವವೆಂದೆನಿಸುವನು ।
ಕುಂಡೆಗೋಳಕರ ಮನೆ ಕುಲದೇವನು ।
ಹಿಂಡುಗೊಲ್ಲರ ಮನೆಯ ಹಿರಿಯ ಗೊಲ್ಲನು ಇವನು ।
ಭಂಡುಗಾರ ಗೊಲ್ಲ ಭುವನದೊಳಗೆಲ್ಲಾ ॥ ೨ ॥

ಒಬ್ಬರೊಳು ಪುಟ್ಟಿ ಮತ್ತೊಬ್ಬರೊಳಗೇ ಬೆಳೆದು ।
ಒಬ್ಬರಿಗು ಮಗನಲ್ಲ ವಂಶದೊಳಗೆ ।
ಹಬ್ಬಗಾರನೆ ನಮ್ಮ ಪುರಂದರ ವಿಠಲನ ।
ಉಬ್ಬುಬ್ಬಿ ಮದಿವ್ಯಾದಿ ಉತ್ಸಾಹದಿಂದ ॥ ೩ ॥

॥ ರಾಗ: ಮಧ್ಯಮಾವತಿ. ತಾಳ: ಅಷ್ಟ ॥

ವೃಂದಾವನದೊಳಗಾಡುವನ್ಯಾರೆ । ಚಂದಿರವದನೆ ।
ನೋಡುವ ಬಾರೆ ॥ ಪಲ್ಲ ॥

ಅರುಣ ಪಲ್ಲವ ಪದಯುಗಗಳನೇ । ದೇವ ।
ಮರಕತ ಮಂಜುಳ ಭರಣನೇ ।
ತರುವ ಯದುವರ ರಾಯನೇ । ಇಂಥಾ ।
ಪರಿಪೂರ್ಣ ಕಾಮ ನಿಸ್ಸೀಮನೇ ॥ ೧ ॥

ಹಾರ ಹೀರ ಗುಣಾಧಾರನೇ । ಗೋಪಿ ।
ಸಾರ ಶರೀರ ಶೃಂಗಾರನೇ ।
ಆರಿಗಾದರೂ ಮನದೋರನೇ । ತನ್ನ ।
ಸೇರಿದವರ ಮಾತು ಮೀರನೇ ॥ ೨ ॥

ಮಕರಕುಂಡಲ ಕಾಂತಿಭರಿತನೆ । ದಿವ್ಯ ।
ಅಕಳಂಕ ರೂಪ ಲಾವಣ್ಯನೇ ।
ಸಕಲರೊಳಗೆ ಈಶ ದೇವನೇ । ನಮ್ಮ ।
ಸತತ ಶ್ರೀ ಪುರಂದರ ವಿಠಲನೇ ॥ ೩ ॥

॥ ರಾಗ: ಕೇದಾರ ಗೌಳ. ತಾಳ: ಅಷ್ಟ ॥

ನಾ ಮುಂದೆ ರಂಗಾ ನೀ ಯೆನ್ನ ಹಿಂದೆ ।
ಎಂದೆಂದು ನಿನ್ನ ನಾಮವ ಎಂದೆಂಬೆ ॥ ಪಲ್ಲ ॥

ಅನಾಥ ನಾನು ಎನಗೆ ಬಂಧು ನೀನು ।
ಹೀನನು ನಾನು ದಯಾವಂತ ನೀನು ।
ಧ್ಯಾನಮಂತ್ರನು ನೀನು ಧ್ಯಾನಿಸುವನು ನಾನು ।
ಜ್ಞಾನಗಮ್ಯನು ನೀನು ಅಜ್ಞಾನಿ ನಾನು ॥ ೧ ॥

ಸುರತರುವು ನೀನು ಫಲ ಬಯಸುವೆ ನಾನು ।
ಸುರ ಧೇನು ನೀನು ಕರದುಂಬೆ ನಾನು ।
ವರ ಚಿಂತಾಮಣಿ ನೀನು ಪರಿ ಚಿಂತಿಸುವೆ ನಾನು ।
ಶರಧಿ ಕ್ಷೀರನೆ ನೀನು ತರುಳನು ನಾನು ॥ ೨ ॥

ಒಂದರೊಳೊಂದೊಂದು ಅವಗುಣ ಹೊಂದಿದೆ ।
ಕಂದನಂತೆತ್ತಿಕೊ ಸಲಹೋ ಬೇಗಾ ।

ತಂದೆ ಶ್ರೀ ಪುರಂದರಾ ವಿಠಲ ರಾಯನು ನೀ ।
ಬಂದೆನ್ನ ಮನದಲ್ಲಿ ನಲಿ ನಲಿದಾಡೋ ॥ ೩ ॥

॥ ರಾಗ: ನಾಟಿ. ತಾಳ: ಅಷ್ಟ ॥

ಕಣ್ಣಾರೆ ಕಂಡೆನಚ್ಯುತನಾ । ಕಂಚಿ ।
ಪುಣ್ಯಕೋಟಿ ಕರಿರಾಜ ವರದನಾ ॥ ಪಲ್ಲ ॥

ವರ ಮಣಿಮಕುಟ ಮಸ್ತಕನಾ । ನರ ।
ಸುರ ಸನಕಾದಿವಂದಿತ ಪಾದಯುಗನಾ ॥
ತರುಣಿ ಲಕ್ಷ್ಮೀಮನೋಹರನಾ ಪೀತಾಂ ।
ಬರದುಡಿಗೆಯಲಿ ರಂಜಿಸುವ ವಿಗ್ರಹನಾ ॥ ೧ ॥

ಕಸ್ತೂರಿ ತಿಲಕ ನೊಸಲನಾ । ತೋರ ।
ಮುತ್ತಿನಹಾರ ಪದಕ ಭೂಷಣನಾ ।
ಎತ್ತಿದಾಭಯ ಹಸ್ತದವನಾ । ತನ್ನ ।
ಭಕ್ತರ ಸ್ತುತಿಗೆ ಹಾರೈಸಿ ಹಿಗ್ಗುವನಾ ॥ ೨ ॥

ನೀಲಮೇಘ ಶ್ಯಾಮದವನಾ । ಬಾಲ !
ಲೋಲ ಮಕರಕುಂಡಲ ಧರಿಸಿಹನಾ !
ಮೂಲೋಕದೊಳಗೆ ಚನ್ನಿಗನಾ । ಉಮಾ !
ಲೋಲಜ ವಂದ್ಯ ವೈಕುಂಠ ವಲ್ಲಭನಾ ॥ ೩ ॥

ಭಾನುಕೋಟಿ ತೇಜದವನ । ಭವ ।
ಕಾನನ ರಾಶಿಗೆ ಹವ್ಯವಾಹನನಾ !
ದಾನವರದೆಯುದಲ್ಲಣನಾ । ಮುನಿ ।
ಮಾನಸ ಹಂಸ ಎಂದೆನಿಸಿಕೊಂಡವನಾ ॥ ೪ ॥

ತುಂಗ ಚತುರ್ಭುಜದವನಾ । ಶುಭ !
ಮಂಗಳ ರೇಖೆ ಅಂಗಾಲಿಲೊಪ್ಪುವನಾ ।
ಶೃಂಗಾರ ಹಾರ ಕಂದರನಾ । ದೇವ ।
ಗಂಗೆಯ ಪಿತ ಪುರಂದರ ವಿಠಲನಾ ॥ ೫ ॥

॥ ರಾಗ: ನಾದನಾಮ ಕ್ರಿಯ. ಆದಿತಾಳ ॥

ಗೋಪಿಯ ಭಾಗ್ಯವಿದು । ಶ್ರೀಪತಿ ತಾ ।
ಶಿಶುರೂಪಿನಲ್ಲಿರುವುದು ॥ ಪಲ್ಲ ॥

ಕಡುಮುದ್ದು ರಂಗನ ತೊಡೆಯಮೇಲಿತ್ತುತ ।
ಜಡೆಯ ಹೆಣೆದು ಹೂವಾ ಮುಡಿಸಿ ಬೇಗಾ ।
ಬಿಡದೆ ಮುತ್ತಿನ ಚಂಡೆಗಳಿಲೆ ಮಲಕನು ।
ಸಡಗರದಿಂದಲಂಕರಿಸಿದಳು ॥ ೧ ॥

ನಿತ್ಯ ನಿರ್ಮಲನಿಗೆ ನೀರೆಯೆರೆದು ತಂದು !
ಯೆತ್ತಿ ತೊಡೆಯೊಳಿಟ್ಟು ಮೊಲೆಯೂಡಿ ।
ಮುತ್ತಕೊಟ್ಟಳು ಬಲುವಿಧದಿಂದ ಆಡಿಸಿ ।
ಅರ್ತಿಯಿಂದಲೆ ಪಾಡಿ ತೂಗಿದಳು ॥ ೨ ॥

ದೃಷ್ಟಿ ಮುಟ್ಟಿತೆಂದು ಇಟ್ಟು ವಿಭೂತಿಯ ।
ಕಟ್ಟಿಯೊಳಾರತಿಗಳ ಬೆಳಕೂ ।
ಥಟ್ಟನೆ ಜೇವುಪ್ಪುಗಳ ನಿವಾಳಿಸಿ ।
ತೊಟ್ಟಿಲೊಳಗೆ ಇಟ್ಟು ತೂಗಿ ಪಾಡಿದಳೂ ॥ ೩ ॥

ಯೇನಪ್ಪ ರಂಗನೀ ಸುಮ್ಮನಿರೋ ದೊಡ್ಡ ।
ಗುಮ್ಮ ಬಂದೈದಾನೆ ಅಳಬೇಡಾ !
ಬೊಮ್ಮನ ಪಿತನಿಗವ್ಮಿಯ ಕೊಡುವೆನು ।
ಸುಮ್ಮಗಿರೂ ಎಂದು ಪಾಡಿ ತೂಗಿದಳೂ ॥ ೪ ॥

ಮಾಧವ ಜೋ ಮಧುಸೂದನ ಜೋ ಜೋ ।
ಯಾದವರಾಯ ಶ್ರೀ ಜೋ ಎನ್ನಲೂ ।
ಆದಿಮೂರುತಿ ನಮ್ಮ ಪುರಂದರ ವಿಠಲನ ।
ಆದರದಿಂದಲಿ ಪಾಡಿ ತೂಗಿದಳೂ ॥ ೫ ॥



Edited, Printed & Published by K. V. Shenoy
at the Prabhat Printers, Ltd., Mangalore.